CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಡಿಸೆಂಬರ್ ೨೫, ೨೦೦೩ (ಪುಷ್ಯ ೪, ಶಕ ವರ್ಷ ೧೯೨೫) | ಸಂಚಿಕೆ ೫೧ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಕಾನೂನು ಸಚಿವಾಲಯ

**ವಿಷಯ:** 2003-2004ನೇ ಸಾಲಿಗೆ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ದಿನಾಂಕ: 23-7-2003ರ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ, ಬೆಂಗಳೂರು ಇವರ ಪತ್ರ ಸಂಖ್ಯೆ: ಕರಾಕಾಸೇಪ್ರಾ: ಅಕೌಂಟ್ಸ್: 71: 2003-2004.

**ಪ್ರಸ್ತಾವನೆ:**

2003-2004ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಉಚಿತ ಕಾನೂನು ನೆರವು, ಕಾನೂನು ಸಾಕ್ಷರತಾ ಆಂದೋಳನ ಕಾರ್ಯಕ್ರಮ ಕಾನೂನು ಶಿಬಿರದ ಮೂಲಕ ಉಚಿತ ಕಾನೂನು ಸಲಹೆ ನೀಡುವುದು ಹಾಗೂ ಜನತಾ ನ್ಯಾಯಾಲಯ ಇತ್ಯಾದಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ರೂ. 102.48 ಲಕ್ಷಗಳನ್ನು ಸಹಾಯಾನುದಾನವಾಗಿ ನೀಡಲು ಒದಗಿಸಿದೆ.

ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರವು ಮೇಲೆ ನಮೂದಿಸಲಾಗಿರುವ ಕಾರ್ಯಕ್ರಮಗಳನ್ನು ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ, ಉಚ್ಚ ನ್ಯಾಯಾಲಯದ ಕಾನೂನು ಸೇವಾ ಸಮಿತಿ, ಹಾಗೂ ತಾಲ್ಲೂಕು ಕಾನೂನು ಸೇವಾ ಸಮಿತಿಗಳ ಮೂಲಕ ಹಮ್ಮಿಕೊಳ್ಳಲು ಹಾಗೂ ಪ್ರಾಧಿಕಾರದ ಮತ್ತು ಅಧೀನ ಕಚೇರಿಗಳ ಸಿಬ್ಬಂದಿ ವರ್ಗದ ವೇತನ ಭತ್ಯೆ ಹಾಗೂ ಕಛೇರಿ ವೆಚ್ಚಗಳಿಗೆ ಪೂರ್ಣ ಪ್ರಮಾಣದ ಸಹಾಯಾನುದಾನದ ಅವಶ್ಯಕತೆ ಇರುವುದಾಗಿ ಮೇಲೆ ಓದಲಾಗಿರುವ ದಿನಾಂಕ: 23-7-2003ರ ಪತ್ರದಲ್ಲಿ ತಿಳಿಸುತ್ತಾ ಈ ಮೊತ್ತವನ್ನು ಶೀಘ್ರವಾಗಿ ಬಿಡುಗಡೆ ಮಾಡುವಂತೆ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 40 ಎಲ್ಎಡಿ 2003, ಬೆಂಗಳೂರು, ದಿನಾಂಕ: 22ನೇ ನವೆಂಬರ್, 2003**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸರ್ಕಾರವು ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ 2003-2004ನೇ ಸಾಲಿನ ಲೆಕ್ಕ ಶೀರ್ಷಿಕೆ "2235-ಸಾಮಾಜಿಕ ಭದ್ರತೆ ಮತ್ತು ಕಲ್ಯಾಣ-60-200-ಇತರೆ ಕಾರ್ಯಕ್ರಮಗಳು-5-(01 ರಿಂದ 10)-101 ಸಹಾಯಾನುದಾನ (ಯೋಜನೇತರ)" ಅಡಿಯಲ್ಲಿ ಸಹಾಯಾನುದಾನ ನೀಡಲು ಒದಗಿಸಲಾಗಿರುವ ಅನುದಾನದಿಂದ ರೂ. 50.00 ಲಕ್ಷ (ಐವತ್ತು ಲಕ್ಷಗಳು ಮಾತ್ರ) ಪ್ರಥಮ ಕಂತಾಗಿ ಸಹಾಯಾನುದಾನವನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಮಂಜೂರು ಮಾಡಿದೆ.

1. ಯೋಜಿತ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಿರುವ ಕುರಿತು ವಿವರವಾದ ವರದಿ ನೀಡುವುದು.
2. ಪ್ರಸ್ತುತ ಮಂಜೂರು ಮಾಡಲಾಗಿರುವ ಅನುದಾನಕ್ಕೆ ಉಪಯುಕ್ತತಾ ಪ್ರಮಾಣ ಪತ್ರವನ್ನು ತಕ್ಷಣವೇ ಸಲ್ಲಿಸುವುದು.
3. ಬಿಡುಗಡೆಗೊಳಿಸಲಾಗಿರುವ ಮೊತ್ತವನ್ನು ಯಾವ ಯಾವ ಉಪ ಲೆಕ್ಕ ಶೀರ್ಷಿಕೆಗಳಿಗೆ ಉಪಯೋಗಿಸಲಾಗಿದೆ ಎಂಬುದರ ಬಗ್ಗೆ ಮಾಹಿತಿ.

ಈ ಮೊತ್ತದ ಅನುದಾನ ಬಿಲ್ಲಿಗೆ ಕಾನೂನು ಇಲಾಖಾ ಕಾರ್ಯದರ್ಶಿಯವರ ಮೇಲು ರುಜು ಪಡೆಯುವ ಮೂಲಕ ಹಣ ಪಡೆಯಲು ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1380 ವೆಚ್ಚ 7: 03 ದಿನಾಂಕ: 21-11-2003ರಲ್ಲಿ ನೀಡಲಾಗಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1518 **ಜಿ. ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2), ಕಾನೂನು ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯದ ಶ್ರೀಗಂಧದ ಕರಕುಶಲಕರ್ಮಿಗಳ ಉಪಯೋಗಕ್ಕಾಗಿ ಶ್ರೀಗಂಧವನ್ನು ಪೂರೈಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಅಪಜೀ 09 ಎಫ್‌ಎಸ್‌ಡಬ್ಲ್ಯೂ 2002 ದಿನಾಂಕ: 14-7-2003 ಮತ್ತು ಇದೇ ಸಂಖ್ಯೆಯ ತಿದ್ದುಪಡಿ ಆದೇಶ ದಿನಾಂಕ: 18-7-2003.
2. ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರಿಂದ ಬಂದಿರುವ ದಿನಾಂಕ: 22-7-2003 ಮತ್ತು ದಿನಾಂಕ: 01-08-2003 ರ ಪತ್ರಗಳು
3. ಸರ್ಕಾರದ ಆದೇಶ ಸಂಖ್ಯೆ: ಅಪಜೀ 38 ಎಫ್‌ಎಸ್‌ಡಬ್ಲ್ಯೂ 2003, ದಿನಾಂಕ: 24-11-2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ರಾಜ್ಯದಲ್ಲಿ ಲಭ್ಯವಿರುವ ಜಾಜ್ ಪೋಕಲ್ ಕ್ಲಾಸ್-1, 2 ಮತ್ತು ಘಟಬದಲಾ ಶ್ರೀಗಂಧದ ಮರಗಳಲ್ಲಿ 5 ಟನ್ ಶ್ರೀಗಂಧದ ಮರವನ್ನು ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರಿಗೆ ಆದ್ಯತೆಯ ಮೇರೆಗೆ ಸೊರಬ, ಸಾಗರ, ಕುಮಟಾ, ಸಿರಸಿ ಮತ್ತು ಸಿದ್ದಾಪುರಗಳಲ್ಲಿರುವ ಸಾಂಪ್ರದಾಯಿಕ ಕರಕುಶಲಕರ್ಮಿಗಳಿಗಾಗಿ ವಿತರಿಸುವ ಸಲುವಾಗಿ ಸರ್ಕಾರಿ ಆದೇಶ ಸಂಖ್ಯೆ: ಅಪಜೀ 28 ಎಫ್‌ಎಸ್‌ಡಬ್ಲ್ಯೂ 2002, ದಿನಾಂಕ: 17-7-2002 ರಲ್ಲಿ ನಿಗದಿಗೊಳಿಸಿದ ಮಾರುಕಟ್ಟೆ ದರದ ಶೇಕಡ 50ರಷ್ಟು ದರದಂತೆ ತಾತ್ಕಾಲಿಕವಾಗಿ ಬಿಡುಗಡೆ ಮಾಡಲು ಹಾಗೂ ಈ ದರವನ್ನು ನಿಯಮಗಳಂತೆ/ ಸರ್ಕಾರದ ಆದೇಶದಂತೆ ಪರಿಷ್ಕರಿಸಿದಾಗ ಆ ದರವೂ ಈ ಪ್ರಕರಣಕ್ಕೂ ಅನ್ವಯವಾಗುತ್ತದೆಯೆಂಬ ಷರತ್ತಿಗೊಳಪಟ್ಟು ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ ಓದಲಾದ (2)ರಲ್ಲಿನ ಪತ್ರಗಳಲ್ಲಿ ಕರ್ನಾಟಕ ರಾಜ್ಯದಲ್ಲಿರುವ ಇನ್ನಿತರ ಶ್ರೀಗಂಧದ ಕರಕುಶಲಕರ್ಮಿಗಳಿಂದ ಬೇಡಿಕೆಗಳು ಬರುತ್ತಿದ್ದು ಅವರುಗಳಿಗೆ ಶ್ರೀಗಂಧವನ್ನು ಪೂರೈಸುವಂತೆ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರುಗಳು ಸರ್ಕಾರವನ್ನು ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶದ ಸಂಖ್ಯೆ: ಅಪಜೀ 07 ಎಫ್‌ಎಸ್‌ಡಬ್ಲ್ಯೂ 2003, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2003**

ಕರ್ನಾಟಕ ರಾಜ್ಯದಲ್ಲಿರುವ ಶ್ರೀಗಂಧದ ಡಿಪೋ ಮತ್ತು ಶ್ರೀಗಂಧದ ಕೋಠಿಗಳಲ್ಲಿ ಲಭ್ಯವಿರುವ ಜಾಜ್ ಪೋಕಲ್ ಕ್ಲಾಸ್ -1, 2 ಮತ್ತು ಘಟಬದಲಾ ಶ್ರೀಗಂಧದ ಮರಗಳನ್ನು ಕರ್ನಾಟಕ ರಾಜ್ಯದಲ್ಲಿರುವ ಶ್ರೀಗಂಧ ಕರಕುಶಲಕರ್ಮಿಗಳ ಉಪಯೋಗಕ್ಕಾಗಿ ಮೇಲೆ ಓದಲಾದ (3)ರಲ್ಲಿನ ದಿನಾಂಕ: 24-11-2003ರ ಕ್ರಮಾಂಕ: ಅಪಜೀ 38 ಎಫ್‌ಎಸ್‌ಡಬ್ಲ್ಯೂ 2003ರ ಸರ್ಕಾರದ ಆದೇಶದಲ್ಲಿ ನಿಗದಿಗೊಳಿಸಿದ ಮಾರುಕಟ್ಟೆ ದರದ ಶೇಕಡ 50ರಷ್ಟು ದರದಂತೆ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರ ಮುಖಾಂತರ ವಿತರಿಸುವ ಸಲುವಾಗಿ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರಿಗೆ ಪೂರೈಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಬಗೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರು ಸೂಕ್ತ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1519 **ಕೆ. ವಿ. ಜಯಲಕ್ಷ್ಮೀ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## EDUCATION SECRETARIAT

**Sub:** Absorption of temporary lecturers working in Sahyadri College of Arts and Commerce and Sahyadri College of Science, Shimoga.

**Read:**
1. Notification No. DPAR 48 SRE 96 dated: 22-01-1997.
2. Notification No. DPAR 55 SRE 2001 dated: 09-07-2002.
3. Letter No. KU/REG/EST/2003/4327 dated: 01-10-2003 Registrar, Kuvempu University

**PREAMBLE:**

1) The State Government has promulgated the Karnataka State Civil Services (Absorptions of persons working as part-time lecturers in the Karnataka Education Department Services) (Department of Collegiate Education) Special Rules 1996, vide Notification No. DPAR 48 SRE 96 dated: 22-01-1997. These rules also have coverage for part-time lecturers working in Sahyadri Arts College and Sahyadri Science College located at Shimoga and the then Madikeri Government College and Government Arts and Science College, Mangalore, which are now merged in the Mangalore University. The rules provide for absorption of part-time lecturers who have worked for not less than two academic years as on the last day of the academic year 1994-1995: it is one academic year for SC/ST candidates. Subsequently these rules have been amended to make NET compulsory for absorption with a provision to pass in NET within

three years failing which their services shall be terminated. Non-NET candidates are also not entitled to UGC pay scales till he/she passes NET within a period of three years.

2) Some of the part-time lecturers who are working in Sahyadri Arts College and Sahyadri Science College, Shimoga have made an appeal to the State Government for absorption of their services in terms of the above rules. Kuvempu University has submitted a proposal for absorption of part-time lecturers working in Sahyadri Arts College and Sahyadri Science College, Shimoga. Kuvempu University has formulated the proposal with the approval of the Syndicate. The list of part-time lecturers working in Sahyadri Arts and Commerce College and Sahyadri Science College, Shimoga consolidated by the Kuvempu University contains the name of 58 part-time lecturers, two more, than in the list sent by the Director of Collegiate Education.

3) The Syndicate of Kuvempu University in its meeting held on 26-08-2003 had identified the part-time lecturers who can be considered for absorption adopting the following principles:-

1. Work load and vacancy position in the colleges.
2. In case of part-time teachers exceeding the vacancies available the seniority rules should be followed.
3. The absorption of part-time lecturer has to be treated as direct recruitment and therefore, reservation roster has to be followed.

4) On consideration of all these factors, Kuvempu University has recommended the absorption of 20 part-time lecturers in terms of the special rules 1996.

5) The proposal of the Kuvempu University for absorption of 20 part-time lecturers working in Sahyadri Arts and Commerce college and Sahyadri Science College, Shimoga which are constituent college of Kuvempu University has been examined in terms of the Karnataka State Civil Services (Absorption of persons working as part-time lecturers in the Karnataka Education Department services) (Department of Collegiate Education) Special Rules 1996 and subsequent amendments and also keeping in view the process of absorption of part-time lecturers initiated by the Department of Collegiate Education and also the need to comply with the stipulation that the vacancies earmarked for SC/STs shall not be utilized for absorption of candidates belonging to other categories etc,.

**Government Order No. ED 79 USV 2003, Bangalore, dated: 2nd December, 2003**

6) In the circumstances explained in the preamble, sanction of State Government is accorded for absorption of 15 part-time lecturers in different subjects working in Sahyadri Arts and Commerce College and Sahyadri Science College, Shimoga, the constituent Colleges of Kuvempu University who are found eligible for absorption as indicated below with immediate effect in accordance with the Karnataka State Civil Services (Absorption of persons working as part-time lecturers in the Karnataka Education Department services) (Department of Collegiate Education) Special Rules 1996 and subsequent amendments.

**List of Part-Time Lecturers to be absorbed Sahyadri Arts and Commerce College**

| Sl. No. | Subject | No. of vacant posts | Names of the part-time lecturers |
|---|---|---|---|
| 1 | History | 01 | Sri. Shafiulla.K |
| 2 | Urdu | 01 | Sri. Aziz Ahmed.K |
| 3 | Political Science | 02 | (1) Sri.Prasanna Kumar<br>(2) Sri. Sathyanarayana B.H |
| 4 | Commerce | 01 | Sri. Srinidhi M.B |

**Sahyadri Science College**

| Sl. No. | Subject | No. of vacant posts | Names of the part-time lecturers |
|---|---|---|---|
| 1 | Physics and Electronics | 04 | (1) Sri. Nagaraj N.<br>(2) Sri. Shashidhara N.M<br>(3) Sri. Mounesha K.M<br>(4) Sri. Mahesh H.M |
| 2 | Zoology and Sericulture | 04<br>(one post reserved for ST) | (1) Sri. Sumantrappa D.B<br>(2) Smt. Shantha A.R<br>(3) Sri. Sayeesha H.A. |
| 3 | Chemistry and Bio-Chemistry | 03<br>(one post reserved for ST) | (1) Dr. Latha K.P<br>(2) Sri. Yuvaraj T.C.M |
| 4 | Botany | 01 | Sri. Nataraj S. |

7) The absorption of the above part-time Lecturers shall be subject to the following conditions.

a) The absorption shall be strictly in accordance with the Karnataka State Civil Services (Absorption of persons working as part-time lecturers in the Karnataka Education Department services) (Department of Collegiate Education) Special Rules 1996 and shall be subject to the conditions imposed in subsequent amendments.

b) The part-time lecturers who satisfy the qualification prescribed in the UGC Regulations including provisions for exemption from passing NET granted by the UGC shall be absorbed in the UGC pay scale of Rs. 8000-13500.
c) The non-NET/SLET candidates shall be absorbed in the State pay scale of Rs. 6000-11200. However such candidates shall invariably possess 55% of marks in eligibility examination.
d) The non-NET/SLET candidates may be granted time upto 09-07-2005 to pass NET/SLET. If they pass the NET/SLET within the prescribed time they would become entitled to UGC pay scale applicable to the post of lecturers. In case of failure to pass the NET/SLET on or before 09-07-2005, they will be removed from the service as per the directions contained in the judgement dated: 04-01-2001 in Civil Appeal No. 27/2001 arising out of SLP (Civil) No. 15991/99.
e) During the probationary period, the absorbed lecturers shall pass Kannada Language and other examinations prescribed if any under the statutes of the University and also compulsorily undergo one month's Orientation Course.
f) The seniority of the absorbed lecturers will be subject to review of seniority list of Lecturers based on the reservation and inters seniority of part-time lecturers.
g) Appointment is subject to final judgement of the litigations pending/that may arise in future regarding absorption of part-time lecturers.
h) The educational qualification, date of birth, caste/ reservation etc shall be verified by the University based on the original documents and necessary entries in this regard shall be made in the Service Register.
i) The part-time lecturers claiming reservation shall submit the validity certificates obtained from the competent authority at the time of reporting for duty.

8) Kuvempu University shall issue orders absorbing the above-indicated 15 part-time lecturers after following the procedure and subject to conditions indicated above.

By Order and in the Name of the Governor of Karnataka,

P. R. 1521

**MUDUGINDAIAH**
Under Secretary to Government,
Education Department (University and General-2).

**Sub:** Validation of absorption of Temporary Lecturers in Bangalore University.

**Read:**
1) G.O. No. ED 5 UBV 92 dated: 08-03-2000.
2) Letter No. EST/II/E5/MISC/99-2000 dated: 24-04-2000 of the Registrar, Bangalore University.
3) Memorandum dated: 22-04-2000 and 24-03-2003 of Bangalore University Teachers Council, Bangalore.
4) G.O. No. ED 139 UBV 2002 dated: 01-08-2002
5) Letter No. EST/II/E3/Temp/Sec/Commt/ 93-94 dated: 22-03-2002 and 27-09-2002 of the Registrar, Bangalore University.
6) Letter No. EST/II/E5/MISC/99-2000 dated: 31-10-2003 of the Registrar, Bangalore University.

**PREAMBLE:**

1) Dr. Tara and 4 0thers, temporary lecturers in Bangalore University had filed WP Nos: 28059-63/91 seeking a writ of mandamus directing the respondents to regularize them. The said W.P's were disposed off by judgement dated: 27-01-98 observing that the Writ Petitions have become anfractuous in view of order dated: 21-03-1994 of Bangalore University regularizing 22 temporary lecturers. A copy of order dated: 21-03-1994 was obtained from Bangalore University. It was issued on the basis of resolution of the Syndicate dated: 18-03-94. Prima-facie, certain irregularities were noticed in the issue of the said order by the Bangalore University.

2) The matter was further examined in the light of alleged violation of UGC Regulations, 1991 and the provisions of KSU Act, 1976 and the feasibility of initiating the process of annulment of the resolution of the Syndicate and the order regularizing 22 lecturers. Bangalore University was served with a show cause notice as required under Section 8 of the KSU Act, 1976 directing it to show cause as to why the resolution of the Syndicate dated: 18-03-1994 and order dated: 21-03-1994 emerging there from regularizing the services of 22 temporary lecturers should not be annulled. Since the reply furnished by the Bangalore University was found to be unsatisfactory, in G.O. No. ED 5 UBV 1992 dated: 08-03-2000 the resolution of the Syndicate dated: 18-03-1994 and the order dated: 21-03-1994 regularizing 22 temporary lecturers were annulled with a direction to terminate their services with one month's notice etc.

3) In reply the Registrar, Bangalore University had submitted that soon after the receipt of the said G.O. dated: 08-03-2000, the matter was laid before the Syndicate on 13-04-2000. It had resolved to write to the Government appealing to reconsider the annulment on the following grounds:

(1) During 1987, Government approved the absorption of temporary lecturers through he Karnataka State Universities (Absorption of temporary lecturers) Act, 1987. Later such of the temporary lecturers who had no coverage of that Act, had represented for regularization resorting to hunger

strike. Government collected the details of the temporary lecturers. It came up before the IUB on 14-11-88. It was generally agreed to regularize their services.

(2) The then Vice-Chancellor Dr. Nanjundappa had requested the Government to expedite regularization of temporary lecturers.

(3) Later the grievances of temporary Lecturers was laid before the Syndicate 06-02-1991 and the decision emerged was to pursue the matter with the Government;

(4) Both Bangalore University and Government were eager to settle this issue and joint efforts were made in this regard;

(5) The entire exercise emerges from the decision of the Government to regularize the contract teachers vide G.O. No: ED 139 SES 88 dated: 07-04-1989;

(6) A Sub-Committee was constituted by the Syndicate under the Chairmanship Prof. Abdul Khayum, the then Director of Collegiate Education to make recommendations for regularization. It recommended for regularization as well as appointment of five SC/ST temporary lecturers to maintain the reservation;

(7) Accepting the recommendation of the Sub-Committee and also BOAs, the Syndicate resolved to regularize 22+5 SC/ST temporary lecturers;

(8) Taking cognizance of such a regularization, the High Court disposed off the WP No: 28059-63/91 on 27-01-1998 as infructous;

(9) Out of 27 regularised lecturers, Dr. Suman Venkatesh and Dr. D.P. Anjaneyaswamy were subsequently appointed as Readers by direct recruitment.

4) However, subsequently applying the principle of 22 lecturers, regularization of 4 temporary lecturers belonging to SC/ST category had also been annulled by Government vide GO No. ED 139 UBV 2002 dated: 01-08-2002. Bangalore University has requested to reconsider the case of 4 temporary lecturers also urging the same grounds.

5) The Bangalore University Teachers Council in its previous and recent memorandum has requested to solve this issue as one time measure in the interest of protecting academic fabric of the University by withdrawing the G.O. dated: 08-03-2000 and 01-08-2002 urging the following various grounds in support of their request

(1) They were appointed during 1985 and 1988 as temporary lecturers. They had put in 6-9 years of service before regularization in 1994. The BOA constituted by the Chancellor had recommended them for appointment as Lecturers. Now, they have already served for 13-17 years and some of them even worked as Research Assistants prior to being appointed as temporary lecturers. In total, they have put in 20-22 years of services. In order to maintain the reservation quota SC/ST temporary lecturers were regularized on 11-09-1996.

(2) Most of them hold MSc/MA/ME, M.Phil, Ph. D with gold medals. They have worked as guides and have participated in International conferences;

(3) Previously, Government had regularized the contract teachers in primary/High Schools, Junior Colleges, Degree Colleges, Engineering Colleges and Polytechnics by a special set of rules.

(4) Most of them are in the age group of 40-50 years barred by maximum age limit for appointment;

(5) The Division Bench of the High Court has set aside the judgement of the Single Judge holding that the temporary lecturers are not entitled to regularization of their services having been appointed under Section 51-B of the KSU Act, 1976. State Government had relied upon this judgement of the Single Judge while passing the orders of the annulment of temporary lecturers in Bangalore University. In view of this order of the Division Bench of the High Court, the order of annulment becomes infructous.

(6) The issue was also placed before the IUB meeting held on 14-11-1988, which had agreed in principal to regularize temporary lecturers who had put in minimum of 3 years service in the University. Acting on the decision, the Education Department had directed all the Universities to freeze the recruitment of temporary lecturers till the issue of regularization of temporary lecturers was sorted out and had sought information regarding temporary lecturers from the Universities.

(7) The issue had again come up before the IUB meeting held on 06-02-1991, which decided to defer the decision till the Supreme Court delivered its judgement on the question of regularization of the services of the temporary lecturers. The Supreme Court in case of Baseruddin M. Madari and others had held that adhoc teachers working in the Universities are also entitled to regularization on par with stop- gap lecturers

(8) In consideration of various factors, Bangalore University constituted a Syndicate Sub-Committee under the Chairmanship of Prof. Abdul Khayum the then Director of Collegiate Education to submit a report regarding the feasibility of regularizing the services of temporary lecturers. Based on the recommendations of the Committee, the Boards of Appointment were convened for approval of regularization of temporary lecturers. They were qualified in terms of the UGC Regulations, 1991. After the approval of the Syndicate, orders regularizing their services were issued on 21-03-1994. To make good the deficiency in reservation, 5 candidates belonging to

SC/ST were appointed as temporary lecturers and absorbed along with 22 temporary lecturers. The University by regularizing their services in clear vacancies with the approval of the Syndicate had put an end to this human problem.

(9) The Supreme Court in its judgement dated: 04-04-1994 in SLPs (C) No. 16442-55/1990 and later in Civil Appeal No.2277-88/1994 in case of Baseruddin M. Madari and others had directed the Karnataka University to regularize the services of temporary lecturers. Following this judgement, the High Court in its judgement, dated: 14-06-1994 had directed the Karnataka University to regularize the services of J.L. Kalyan and others working as temporary lecturers in Karnataka University.

(10) The regularized lecturer had lost opportunity of applying for the posts advertised by the University to fill up the vacancies of P.G. Centres of Tumkur and Kolar and also in other Universities.

(11) In view of the legal pronouncements of the Supreme Court of India and also the High Court of Karnataka in favour of regularization of teachers and also advanced age of this teachers (42-56 years), academic credentials, long service in the University (15-19 years), it has been requested to rescind the G.O.s of annulment in the interest of justice.

6) The matter had also come up before the Legislature Committee on Sub-ordinate Legislation for discussion. This issue along with other issues were considered by Committee after obtaining the opinion of the Law Department. The Committee had recommended for reconsideration in view of delay of 6 years in deciding the validity of the absorption etc,.

7) The issue of annulment of regularization of 22+4 temporary lecturers in Bangalore University has been examined denova in the light of various new factors and legal pronouncements which are as follows:-

(1) The decision in principle to regularize the services of temporary lecturers had been taken in the IUB and acting on it, State Government was coordinating this issue by calling for details/ information from Universities. State Government had even directed to freeze appointment of temporary lecturers till such time the issue of regularization is sorted out.

(2) Previously State Government had regularized contract teachers working in schools, Junior Colleges, degree colleges and engineering colleges. State Government had regularized stopgap lecturers in aided colleges and recently part-time lecturers in degree colleges.

(3) They were appointed during 1985-88 and had put in 6-9 years as on the date of their regularization and another 9 years after regularization. The Syndicate Sub-Committee headed by the then DCE had recommended for their regularisation. All of them were qualified to be appointed as lecturers as per the UGC Regulations, 1991. The Boards of Appointment had cleared their cases for appointment;

(4) In view of this regularization, they did not attempt for open selection in Bangalore University and else where and lost the opportunity of regular recruitment

(5) All of them are in the age group 40-50 years barred by maximum age limit for appointment;

(6) Even if there are certain procedural irregularities in their regularization, the teachers cannot be blamed for it. Bangalore University has to take that blame.

(7) The Legislature Committee on Subordinate Legislation, which discussed the Government Order annulling the appointment of 22 temporary lecturers, had recommended for reconsideration on the ground of delay in deciding the validity of the absorption.

(8) The Supreme Court in Civil Appeal Nos 2277-88/94 decided on 04-04-1994, relying on the case of Karnataka State Private College Stop-Gap Lecturers Association had held that adhoc teachers working in Universities are also entitled to similar relief's and had directed to regularize them as and when vacancies arises and also to create additional posts to absorb such teachers in case of shortage on account of reservation. Relying on this law laid own by the Supreme Court, the High Court in its order dated: 14-06-1994 had also directed the Karnataka University to regularize the temporary lecturers. It is a settled principle of law that equitable relief has to be extended to all similarly placed persons.

8) In the circumstances, the withdrawal of GO. No. ED 5 UBV 92 dated: 08-03-2000 and ED 139 UBV 2000 dated: 01-08-2002 annulling regularization of 22 and 4 temporary lecturers in Bangalore University has been examined and the following order is made.

**GOVERNMENT ORDER No. ED 8 UBV 2000, BANGALORE, DATED: 3rd December, 2003**

9) In the circumstances explained in the preamble, Government of Karnataka hereby withdraws the G.O. No. ED 5 UBV 92 dated: 08-03-2000 and ED 139 UBV 2000 dated: 01-08-2002 annulling regularization of 22 and 4 temporary lecturers in Bangalore University.

By Order and in the Name of the Governor of Karnataka,

P. R. 1522

**MUDUGINDAIAH**

Under Secretary to Government,

Education Department (University and General-2).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ರಾಜ್ಯದ ಗ್ರಾಮ ಪಂಚಾಯತಿಗಳಿಗೆ ಬ್ಯಾಂಕುಗಳ ಮುಖಾಂತರ ಅನುದಾನಗಳನ್ನು ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಸುತ್ತೋಲೆ ಕ್ರಮಾಂಕ: ಗ್ರಾಅಪ 129 ಗ್ರಾಪಂಕ 2002, ದಿನಾಂಕ: 17-9-2002.

2. ಅನಧಿಕೃತ ಟಿಪ್ಪಣಿ ಕ್ರಮಾಂಕ: ಆಇ 2491 ವೆಚ್ಚ -6/03, ದಿನಾಂಕ: 1-12-2003.

**ಪ್ರಸ್ತಾವನೆ:**

ಗ್ರಾಮಪಂಚಾಯತಿಗಳಿಗೆ ಸರ್ಕಾರದಿಂದ ಬಿಡುಗಡೆಯಾಗುವ ಅನುದಾನ ರಾಷ್ಟ್ರೀಕೃತ ಬ್ಯಾಂಕುಗಳ ಮೂಲಕವೇ ವಿತರಣೆಯಾಗುವ ವ್ಯವಸ್ಥೆ ಬಗ್ಗೆ ವಿವರವಾಗಿ ಮೇಲೆ ಓದಲಾದ ಸುತ್ತೋಲೆಯಲ್ಲಿ ವಿಷದಪಡಿಸಲಾಗಿದೆ. ಸದರಿ ಗ್ರಾಮ ಪಂಚಾಯತಿಗಳಿಗೆ ನೇರವಾಗಿ ಬ್ಯಾಂಕ್‌ಗಳ ಮುಖಾಂತರ ಹಣ ಬಿಡುಗಡೆ ಮಾಡಿದಲ್ಲಿ ಈ ಸೌಲಭ್ಯವನ್ನು ಸುಗಮವಾಗಿ ಜಾರಿಗೊಳಿಸಿದಂತಾಗುತ್ತದೆ. ಆರ್ಥಿಕ ಇಲಾಖೆಯು ಗ್ರಾಮ ಪಂಚಾಯತಿಗಳಿಗೆ ಮೂರನೇ ಕಂತನ್ನಾಗಿ ಹಣ ಬಿಡುಗಡೆ ಮಾಡುವ ಬಗ್ಗೆ ರೂ. 56.66 ಕೋಟಿ ಅನುದಾನವನ್ನು ಬಿಡುಗಡೆ ಮಾಡಲು ಮೇಲೆ ಓದಲಾದ ಉಲ್ಲೇಖ (2)ರಲ್ಲಿ ಸಹಮತಿಸಿರುತ್ತದೆ. ಪ್ರತಿ ಗ್ರಾಮ ಪಂಚಾಯತಿಗೆ ರೂ. 1.00 ಲಕ್ಷದಂತೆ ಅನುದಾನ ಬಿಡುಗಡೆ ಮಾಡಬೇಕಾಗಿರುತ್ತದೆ. ಸದರಿ ರೂ. 56.66 ಕೋಟಿ ಅನುದಾನವು ಅಧೀನ ಕಾರ್ಯದರ್ಶಿಯವರು (ಜಿಲ್ಲಾ ಪಂಚಾಯತ್ ಮತ್ತು ಗ್ರಾಮ ಪಂಚಾಯತ್) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರು ಪ್ರಾರಂಭಿಸುವ ಉಳಿತಾಯ ಖಾತೆಯಲ್ಲಿ ಇಡಬೇಕಾಗುತ್ತದೆ, ಕೂಡಲೇ ಈ ಅನುದಾನವನ್ನು ಗ್ರಾಮ ಪಂಚಾಯತಿಯ ಉಳಿತಾಯ ಖಾತೆಗೆ ವರ್ಗಾವಣೆ ಮಾಡುವ ಬಗ್ಗೆ ಅಗತ್ಯ ಕ್ರಮ ತೆಗೆದುಕೊಳ್ಳಬೇಕೆಂದು ಆರ್ಥಿಕ ಇಲಾಖೆ ಸೂಚಿಸಿರುತ್ತದೆ. ಅದರಂತೆ ಸದರಿ ಅನುದಾನ ಬಿಡುಗಡೆಗಾಗಿ ಈ ಕೆಳಗಿನಂತೆ ಆದೇಶಿಸಲಾಗಿದೆ.

### ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 129 ಗ್ರಾಪಂಕ 2002, (3) ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2003

ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡಬೇಕಾದ ಅನುದಾನಗಳ ಮೂರನೇ ಕಂತಾದ ರೂ.56.66 ಕೋಟಿ ಅನುದಾನ ಬಿಡುಗಡೆಗೊಳಿಸಿ ಆದೇಶಿಸಿದೆ. ಹಾಗೂ ಈ ಅನುದಾನವನ್ನು ರಾಜ್ಯ ಹುಜೂರ್ ಖಜಾನೆಯಿಂದ ಪೇಯೀಸ್ ರಸೀತಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಶಾಖೆ, ರಾಜದೂತ್ ಕಾಂಪ್ಲೆಕ್ಸ್ ಒಂದನೇ ಮಹಡಿ, ಮೈಸೂರು ಬ್ಯಾಂಕ್ ವೃತ್ತ, ಬೆಂಗಳೂರು-560 002 ಇಲ್ಲಿ ತೆರೆದಿರುವ ಉಳಿತಾಯ ಖಾತೆಯ ಮುಖಾಂತರ ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ಹಣವನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಗೊಳಿಸಲು ಆದೇಶಿಸಿದೆ.

1. 2515-00-198-1-07, (ಯೋಜನೆ) 2. 2515-00-198-1-22, (ಯೋಜನೆ)

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಕ್ರಮಾಂಕ: ಆಇ 2491 / ವೆಚ್ಚ- 6/ 03, ದಿನಾಂಕ: 1-12-03 ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1523 **ಟಿ. ಆರ್. ರಘುನಂದನ್**

ಸರ್ಕಾರದ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಎಸ್. ಇಂದುಮತಿ, ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಮಾಲೂರು, ಕೋಲಾರ ಜಿಲ್ಲೆ, ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ:** 1. ಆಯುಕ್ತರು, ಆರೋಗ್ಯ ಮತ್ತು ಕು. ಕ. ಸೇವೆಗಳು, ಬೆಂಗಳೂರು ಅವರ ನೋಟಿಸ್ ಸಂಖ್ಯೆ: ಜೆಆರ್‌ಒ (1) 30/ 96-97, ದಿನಾಂಕ: 30-1-2001.

2. ಡಾ: ಎಸ್. ಇಂದುಮತಿ ರವರ ರಕ್ಷಣಾ ಹೇಳಿಕೆ ದಿನಾಂಕ: 12-3-2001.

3. ಆಯುಕ್ತರು, ಆರೋಗ್ಯ ಮತ್ತು ಕು. ಕ. ಸೇವೆಗಳು, ಬೆಂಗಳೂರು ಇವರ ಆದೇಶ ಸಂಖ್ಯೆ: ಜೆಆರ್‌ಒ (1) 30/ 96-97, ದಿನಾಂಕ: 27-3-2001.

4. ಮುಖ್ಯ ಜಾಗೃತಾಧಿಕಾರಿ (ಜಾಕೋ), ಆರೋಗ್ಯ ಮತ್ತು ಕು. ಕ.ಸೇವೆಗಳು, ಬೆಂಗಳೂರು ಇವರ ವಿಚಾರಣಾ ವರದಿ ಸಂಖ್ಯೆ: ಮುಜಾಅ/ ಜಾಕೋ/ ಆ/ 31/ 2000-01, ದಿನಾಂಕ: 1-8-2001.

5. ಆಯುಕ್ತರು, ಆರೋಗ್ಯ ಮತ್ತು ಕು. ಕ. ಸೇವೆಗಳು, ಬೆಂಗಳೂರು ಅವರ ತಿಳುವಳಿಕೆ ಪತ್ರ ಸಂಖ್ಯೆ: ಜೆಆರ್‌ಒ (1) 30/ 96-97, ದಿನಾಂಕ: 8-8-2001.

6. ಡಾ: ಎಸ್. ಇಂದುಮತಿ, ರವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ: 10-11-2001.

**ಪ್ರಸ್ತಾವನೆ:**

ಡಾ: ಎಸ್. ಇಂದುಮತಿ, ಮಹಿಳಾ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಮಾಲೂರು, ಕೋಲಾರ ಜಿಲ್ಲೆ ಇಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ದಿನಾಂಕ: 8-11-1997ರಿಂದ 10-9-1998 ರವರೆಗೆ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿದ್ದುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ, ನಿಯಮ -11 ರಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಮೇಲೆ (1)ರಲ್ಲಿ ಓದಲಾದ ಪತ್ರದ ಮೂಲಕ ಆಯುಕ್ತರು, ಆರೋಗ್ಯ ಮತ್ತು ಕು. ಕ. ಸೇವೆಗಳು, ಬೆಂಗಳೂರು ಅವರು ಆರೋಪಿತ ವೈದ್ಯಾಧಿಕಾರಿಗೆ ಜಾರಿ ಮಾಡಿ ಅವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುವಂತೆ ಕೋರಲಾಗಿತ್ತು. ಆರೋಪಿತ ವೈದ್ಯಾಧಿಕಾರಿಯು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ರಕ್ಷಣಾ ಹೇಳಿಕೆ ಸಲ್ಲಿಸಿದ್ದು.

ಹೇಳಿಕೆಯಲ್ಲಿ ಕಾರಣಗಳು ಸಮಂಜಸವಾಗಿರದಿದ್ದರಿಂದ ಈ ಪ್ರಕರಣವನ್ನು ಇಲಾಖಾ ವಿಚಾರಣೆಗೆ ವಹಿಸಲು ಆಯುಕ್ತರು, ಆರೋಗ್ಯ ಮತ್ತು ಕು. ಕ. ಸೇವೆಗಳು, ಬೆಂಗಳೂರು ಅವರು ತೀರ್ಮಾನಿಸಿ, ಮೇಲೆ (3)ರಲ್ಲಿ ಓದಲಾದ ತಮ್ಮ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿ (ಜಾಗೃತ ಕೋಶ), ಆರೋಗ್ಯ ಮತ್ತು ಕು. ಕ. ಸೇವೆಗಳು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಆಡಳಿತಾಧಿಕಾರಿ (ಸಾಮಾನ್ಯ) ಆರೋಗ್ಯ ಮತ್ತು ಕು. ಕ. ಸೇವೆಗಳು, ಬೆಂಗಳೂರು ಅವರನ್ನು ಮಂಡನಾಧಿಕಾರಿಗಳನ್ನು ನೇಮಿಸಿ ವಿಚಾರಣೆ ನಡೆಸಿ, ವಿಚಾರಣಾ ವರದಿ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿ ಮೇಲೆ (4)ರಲ್ಲಿ ಓದಲಾದ ಪತ್ರದ ಮೂಲಕ ವರದಿಯನ್ನು ಸಲ್ಲಿಸಿದ್ದು, ಆಪಾದಿತ ವೈದ್ಯಾಧಿಕಾರಿಯ ಮೇಲೆ ಮಾಡಲಾದ ಅನಧಿಕೃತ ಗೈರುಹಾಜರಿಯ ಆಪಾದನೆ ಸಾಬೀತಾಗಿರುತ್ತದೆ ಎಂಬ ನಿರ್ಣಯಕ್ಕೆ ಬಂದಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಮೇಲೆ (5)ರಲ್ಲಿ ಓದಲಾದ ತಿಳುವಳಿಕೆ ಪತ್ರದ ಮೂಲಕ ಆಪಾದಿತ ವೈದ್ಯಾಧಿಕಾರಿಗೆ ಜಾರಿ ಮಾಡಿ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ವಿವರಣೆ ಕೋರಲಾಗಿತ್ತು. ಆರೋಪಿತ ವೈದ್ಯಾಧಿಕಾರಿಯು ಮೇಲೆ (6) ರಲ್ಲಿ ಓದಲಾದ ಪತ್ರದ ಮೂಲಕ ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು ಅವರ ಪ್ರತಿ ರಕ್ಷಣಾ ಹೇಳಿಕೆಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಅಂಶಗಳು ಇರುವುದಿಲ್ಲ.

ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು, ಸಂಬಂಧಿಸಿರುವ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಡಾ: ಎಸ್. ಇಂದುಮತಿ, ಮಹಿಳಾ ವೈದ್ಯಾಧಿಕಾರಿ ಇವರು ಸಾರ್ವಜನಿಕ ಆಸ್ಪತ್ರೆ, ಮಾಲೂರು, ಕೋಲಾರ ಜಿಲ್ಲೆ, ಇಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಇವರನ್ನು ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆ ಮಾಡಿ, ಕಿಮ್ಸ್, ಹುಬ್ಬಳ್ಳಿ ಇಲ್ಲಿಗೆ ನೇಮಿಸಲಾಗಿತ್ತು. ತದನಂತರ ಕೌಟುಂಬಿಕ ಕಾರಣಗಳಿಗಾಗಿ ಇವರು ಸ್ನಾತಕೋತ್ತರ ವ್ಯಾಸಂಗವನ್ನು ಮೊಟಕುಗೊಳಿಸಿರುತ್ತಾರೆ. ಅದರ ನಂತರ ಇವರನ್ನು ದಿನಾಂಕ: 7-11-1997ರಂದು ಸಾರ್ವಜನಿಕ ಆಸ್ಪತ್ರೆ, ಲಿಂಗಸುಗೂರು, ರಾಯಚೂರು ಇಲ್ಲಿಗೆ ನೇಮಕ ಮಾಡಲಾಗಿದೆ.

ತನಗೆ ನೇಮಕಾತಿ ಮಾಡಿದ ಸ್ಥಳವು ಬಹಳ ದೂರ ಇದ್ದುದರಿಂದ ಹಾಗೂ ತನ್ನ ಪತಿಯವರು ಸರ್ಕಾರಿ ಸೇವೆಯಲ್ಲಿದ್ದುದರಿಂದ, ತನಗೆ ಮಾಲೂರಿಗೆ ವರ್ಗ ಮಾಡಬೇಕೆಂದು ಪಟ್ಟು ಹಿಡಿದು ಈ ಕಾರಣಕ್ಕಾಗಿ ಸದರಿ ವೈದ್ಯರು ಕರ್ತವ್ಯಕ್ಕೆ ಗೈರುಹಾಜರಾಗಿರುತ್ತಾರೆ. ನಂತರ ಇವರನ್ನು ದಿನಾಂಕ: 10-9-1998ರಂದು ಮಾಲೂರಿಗೆ ವರ್ಗಾವಣೆ ಮಾಡಲಾಗಿತ್ತು. ಇವರ ದಿನಾಂಕ: 8-11-1997ರಂದು ದಿನಾಂಕ: 10-9-1998 ರವರೆಗೆ ಅನಧಿಕೃತ ಗೈರುಹಾಜರಿ ಆರೋಪದ ಬಗ್ಗೆ ವಿಚಾರಣೆ ಮಾಡಲಾಯಿತು. ವಿಚಾರಣಾಧಿಕಾರಿಗಳು ವರದಿ ಸಲ್ಲಿಸುತ್ತಾ ಅನಧಿಕೃತ ಗೈರುಹಾಜರಿ ಆರೋಪವು ಸಂಪೂರ್ಣ ಸಾಬೀತಾಗಿದೆ ಎಂದು ತಿಳಿಸಿರುತ್ತಾರೆ. ಆಪಾದಿತ ನೌಕರರು ತನ್ನ ಅಹವಾಲಿನಲ್ಲಿ ಕೌಟುಂಬಿಕ ಸಮಸ್ಯೆಗಳಿಂದ ಹೋಗಲು ಆಗಲಿಲ್ಲ. ಹಾಗೂ ತನ್ನ ಪತಿಯು ಮಾಲೂರಿನಲ್ಲಿ ಕೆಲಸ ಮಾಡುತ್ತಿರುವುದರಿಂದ, ಕೋಲಾರ ಜಿಲ್ಲೆಗೆ ವರ್ಗಾವಣೆ ಮಾಡಲು ಅರ್ಜಿ ಸಲ್ಲಿಸಿ, ಆದೇಶಕ್ಕಾಗಿ ಕಾಯುತ್ತಿದ್ದೆ ಎಂದು ಹೇಳಿರುತ್ತಾರೆ.

ಆಯುಕ್ತರು ಇವರನ್ನು 4 ತಿಂಗಳಿಗಿಂತ ಹೆಚ್ಚು ಅವಧಿಗೆ ಅನಧಿಕೃತ ಗೈರುಹಾಜರಾಗಿರುವುದರಿಂದ ಕೆ.ಸಿ.ಎಸ್.ಆರ್. ನಿಯಮ-108 ರಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಬಹುದೆಂದು ಶಿಫಾರಸ್ಸು ಮಾಡಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಆಪಾದಿತರ ಅಹವಾಲನ್ನು ಗಮನಿಸಿದಾಗ ವ್ಯಕ್ತವಾಗುವ ಅಂಶವೇನೆಂದರೆ, ಇವರು ಸರ್ಕಾರಿ ಸೇವೆಯನ್ನು ಗಂಭೀರವಾಗಿ ತೆಗೆದುಕೊಂಡಿರುವುದಿಲ್ಲ. ತಾನು ಇಚ್ಛಿಸಿದ ಸ್ಥಳಕ್ಕೆ ವರ್ಗಾವಣೆ ಮಾಡಿದ್ದಲ್ಲಿ ಮಾತ್ರ ಸರ್ಕಾರಿ ಸೇವೆ ಸಲ್ಲಿಸುವೆನೆಂಬ ಮನೋಭಾವನೆ ಹೊಂದಿರುತ್ತಾರೆ. ಸಾಮಾನ್ಯವಾಗಿ ಗಂಡ-ಹೆಂಡತಿ ಇಬ್ಬರು ಸರ್ಕಾರಿ ಸೇವೆಯಲ್ಲಿ ಇದ್ದರೆ ಆದಷ್ಟು ಮಟ್ಟಿಗೆ ಅಕ್ಕಪಕ್ಕದಲ್ಲಿ ನೇಮಿಸಲು ಸರ್ಕಾರ ಪ್ರಯತ್ನಿಸುತ್ತದೆ. ಆದರೆ ಸರ್ಕಾರಿ ನೌಕರರು ಇದು ತನ್ನ ಒಂದು ಹಕ್ಕು ಎಂದು ಭಾವಿಸುವಂತಿಲ್ಲ. ಈ ಪ್ರಕರಣದಲ್ಲಿ ವೈದ್ಯರು ತನ್ನ ಗಂಡ ಮಾಲೂರಿನಲ್ಲಿ ಕೆಲಸ ಮಾಡುತ್ತಿರುವುದರಿಂದ, ಅಲ್ಲಿಗೆ ವರ್ಗಾಯಿಸಬೇಕೆಂದು ಹಠ ಹಿಡಿದು ಅನಧಿಕೃತ ಗೈರುಹಾಜರಾಗಿರುತ್ತಾರೆ.

ಇವರ ಅನಧಿಕೃತ ಗೈರುಹಾಜರಿಯು ಸಂಪೂರ್ಣವಾಗಿ ಸಾಬೀತಾಗಿದೆ. ದಿನಾಂಕ: 8-11-1997ರಿಂದ ದಿನಾಂಕ: 10-9-1998 ರವರೆಗೆ ಇವರು ಯಾವುದೇ ರಜೆಯನ್ನಾಗಲೀ ಸಲ್ಲಿಸಿರುವುದಿಲ್ಲ. ಮೇಲಾಧಿಕಾರಿಗಳ ಒಪ್ಪಿಗೆಯನ್ನು ಪಡೆದಿರುವುದಿಲ್ಲ. ವಿಚಾರಣಾ ಕಾಲದಲ್ಲಿ 4 ತಿಂಗಳಿಗಿಂತ ಜಾಸ್ತಿ ಅನಧಿಕೃತ ಗೈರುಹಾಜರಾಗಿದ್ದಲ್ಲಿ, ಸರ್ಕಾರಿ ಸೇವೆಯಿಂದ ವಜಾ ಮಾಡಲು ಆಸ್ಪದವಿದೆ ಎಂಬುದು ಗೊತ್ತಿದೆಯೇ? ಎಂದು ಪಾಟೀ ಸವಾಲಿನಲ್ಲಿ ಕೇಳಿದಾಗ, ಅದರ ಬಗ್ಗೆ ತನಗೆ ಗೊತ್ತಿಲ್ಲವೆಂದು ಜಾರಿಕೆಯ ಉತ್ತರ ನೀಡಿದ್ದಾರೆ. ಆದುದರಿಂದ ವ್ಯಕ್ತವಾಗುವ ಅಂಶವೇನೆಂದರೆ, ಇವರು ಸರ್ಕಾರಿ ಸೇವೆಯೆಂದರೆ ತನ್ನ ಇಚ್ಛಾನುಸಾರ ಕೆಲಸಕ್ಕೆ ಬರಬಹುದು, ಇಚ್ಛಾನುಸಾರ ಹೋಗಬಹುದು ಎನ್ನುವ ಧೋರಣೆ ತಾಳಿದಂತಿದೆ.

ಆದುದರಿಂದ ಇವರ ಅನಧಿಕೃತ ಗೈರುಹಾಜರಿಯನ್ನು ಗಂಭೀರವಾಗಿ ಪರಿಗಣಿಸಿ ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ , ನಿಯಮ-8 (viii)ರನ್ವಯ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಆಕುಕ 168 ಎಂಎಸ್ಎ 2002, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ), ನಿಯಮಾವಳಿಗಳು, 1957ರ ನಿಯಮ-8 (viii)ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಡಾ: ಎಸ್. ಇಂದುಮತಿ, ಮಹಿಳಾ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಮಾಲೂರು, ಕೋಲಾರ ಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1524

ಎಸ್. ಕೆ. ತೆಗ್ಗಿನಮನಿ

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.